ಲಿಖಿತ ಮೂಲಕ ಉತ್ತರಿಸುವ



ಕರ್ನಾಟಕ ವಿಧಾನ ಪರಿಷತ್ತು

ನೂರ ನಲವತ್ತನೆಯ ಅಧಿವೇಶನ

ಗುರುವಾರ, ದಿನಾಂಕ : 12 ನೇ ಮಾರ್ಚ್, 2020

ವಾಣಿಜ್ಯ ತೆರಿಗೆ ಇಲಾಖೆಯಲ್ಲಿ ಅಧಿಕಾರಿ/ನೌಕರರ ಜೇಷ್ಠತೆ ನಿಗದಿಪಡಿಸುವ ಬಗ್ಗೆ

ಶ್ರೀ ಶರಣಪ್ಪ ಮಟ್ಟೂರ (ಶಿಕ್ಷಕರ ಕ್ಷೇತ್ರ) :-

788 (726) ಮಾನ್ಯ ಮುಖ್ಯಮಂತ್ರಿಗಳು ಈ ವಿಷಯಗಳನ್ನು ದಯವಿಟ್ಟು ತಿಳಿಸುವರೆ:-

(ಅ) ವಾಣಿಜ್ಯ ತೆರಿಗೆ ಇಲಾಖೆಯಲ್ಲಿ 01-07-1984ರ ನಂತರ ದಿನಗೂಲಿ ನೌಕರರಾಗಿ ಸೇರಿದ್ದ ನೌಕರರಿಗೆ ಸಂಬಂಧಪಟ್ಟಂತೆ ಸುಪ್ರೀಂಕೋರ್ಟ್ ಆದೇಶ ಸಂಖ್ಯೆ (ಸಿಎ ನಂ. 3595-3612/1999), ದಿನಾಂಕ: 10-04-2006)ರ ಆದೇಶ ಪ್ಯಾರಾ ನಂ. 46ರಲ್ಲಿ ಇಲಾಖೆಗೆ ನಿರ್ದಿಷ್ಟವಾಗಿ ನಿಗದಿಪಡಿಸಿದ್ದ ತೀರ್ಪಿನ ವಿರುದ್ಧ ಸಕ್ರಮಾತಿ ಮಾಡಿರುವುದು ನಿಜವೇ ; ಇದ್ದಲ್ಲಿ, ತೀರ್ಪಿನ ವಿರುದ್ಧ ಸಕ್ರಮಾತಿ ಮಾಡಲು ಕಾರಣಗಳೇನು ;

(ಆ) ಸುಪ್ರೀಂಕೋರ್ಟ್ ಆದೇಶ ಉಲ್ಲಂಘಿಸಿ ದಿನಗೂಲಿ ನೌಕರರಿಗೆ ಹಿಂದಿನ ದಿನಾಂಕಕ್ಕೆ ಜೇಷ್ಠತೆಯನ್ನು ನಿಗದಿಪಡಿಸಿ ಸಕ್ರಮಾತಿ ಮಾಡಿರುವ ಲೋಪವನ್ನು ಸರಿಪಡಿಸಬೇಕೆಂದು ಪ್ರಕರಣ ಸಂಖ್ಯೆ:131/2016(ಸೇವೆ)ರಲ್ಲಿ ಕರ್ನಾಟಕ ರಾಜ್ಯ ಅನುಸೂಚಿನ ಜಾತಿಗಳ ಮತ್ತು ಅನುಸೂಚಿತ ಬುಡಕಟ್ಟುಗಳ ಆಯೋಗದಿಂದ ತೀರ್ಪು ನೀಡಿರುವುದು ನಿಜವೇ, ಇದರನ್ವಯ ಕೈಗೊಂಡಿರುವ ಕ್ರಮಗಳೇನು ;

(ಇ) ಸದರಿ ಆಯೋಗದ ತೀರ್ಪಿನನ್ವಯ ಕ್ರಮ ಕೈಗೊಳ್ಳಲು ವಾಣಿಜ್ಯ ತೆರಿಗೆ ಇಲಾಖೆಯು ಯಾವ ದಿನಾಂಕದಂದು ಹಣಕಾಸಿನ ಇಲಾಖೆಗೆ ಅಭಿಪ್ರಾಯ ಕೋರಿದೆ ; (ಪ್ರತಿ ನೀಡುವುದು)

(ಈ) ಇದಕ್ಕೆ ಸಂಬಂಧಪಟ್ಟ ಕಡತ ಸಂಖ್ಯೆ: ಎಫ್‌ಡಿ 37ಸಿಎಸ್‌ಎಂ 2018 (ಕಂಪ್ಯೂಟರ್ ನಂ 97700) ಕ್ಕೆ ಅಭಿಪ್ರಾಯ ನೀಡಲು ವಿಳಂಬವಾಗುತ್ತಿರಲು ಕಾರಣಗಳೇನು ; ಈ ಬಗ್ಗೆ ಅಭಿಪ್ರಾಯ ಕೋರಿ ಹಣಕಾಸಿನ ಇಲಾಖೆಯಿಂದ ಯಾವ್ಯಾವ ಇಲಾಖೆಗಳಿಗೆ ಕಳುಹಿಸಲಾಗಿದೆ ; ಆ ಇಲಾಖೆಗಳು ನೀಡಿರುವ ಅಭಿಪ್ರಾಯದ ಪ್ರತಿ ಒದಗಿಸುವುದು; ಪ್ರಸ್ತುತ ಕಡತವು ಯಾವ ಹಂತದಲ್ಲಿದೆ ; (ಸಮಗ್ರ ವಿವರ ನೀಡುವುದು)

(ಉ) ಯಾವ ನಿರ್ದಿಷ್ಟ ದಿನಾಂಕದಂದು ಅಭಿಪ್ರಾಯ ನೀಡಿ ನೇರ ನೇಮಕಾತಿಯಾದ ನೌಕರರಿಗೆ ನ್ಯಾಯವನ್ನು ಒದಗಿಸಲಾಗುವುದು?